# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 236

ಸದಸ್ಯರ ಹೆಸರು : ಶ್ರೀ ಹೆಚ್.ಎಂ.ರಮೇಶ್ ಗೌಡ (ವಿಧಾನಸಭೆಯಿಂದ ಚುನಾಯಿತರಾದವರು)

ಉತ್ತರಿಸುವ ದಿನಾಂಕ : 04-03-2020

ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
| --- | --- | --- |
| ಅ) | ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಉತ್ತರ ತಾಲ್ಲೂಕು, ಕಸಬಾ ಹೋಬಳಿಯ ಹೆಣ್ಣೂರು ಗ್ರಾಮದ ಸರ್ವೆ ನಂಬರ್ 30, ಸರ್ಕಾರಿ ಜಾಗವನ್ನು ಯಾವ ಉದ್ದೇಶಕ್ಕಾಗಿ ಯಾರಿಗೆ ಹಂಚಿಕೆ ಮಾಡಲಾಗಿದೆ; (ಸಂಪೂರ್ಣ ವಿವರ ನೀಡುವುದು) | ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಉತ್ತರ ತಾಲ್ಲೂಕು, ಕಸಬಾ ಹೋಬಳಿ, ಹೆಣ್ಣೂರು ಗ್ರಾಮದ ಸ.ನಂ. 30ರ ಜಮೀನು ಮೂಲತಃ ಸರ್ಕಾರಿ ಕಲ್ಲುಬಂಡೆ ಎಂದು ವರ್ಗೀಕರಣಗೊಂಡಿರುತ್ತದೆ. ಒಟ್ಟು 21-17 ಎ/ಗು ಜಮೀನಿನ ಪೈಕಿ ಆಕಾರ್‌ಬಂದ್ ಪ್ರಕಾರ ಈ ಕೆಳಕಂಡಂತೆ ಉಡಾಫೆ ನಂಬರ್‌ಗಳಾಗಿ ನಮೂದಿಸಲಾಗಿರುತ್ತದೆ.<br><br>ಸ.ನಂ 112 ರಲ್ಲಿ 00-61 (ಹೆಕ್ಟರ್-ಹೇರ್ಸ್)<br>ಸ.ನಂ 113 ರಲ್ಲಿ 00-32 (ಹೆಕ್ಟರ್-ಹೇರ್ಸ್)<br>ಸ.ನಂ 114 ರಲ್ಲಿ 00-69 (ಹೆಕ್ಟರ್-ಹೇರ್ಸ್)<br>ಸ.ನಂ 115 ರಲ್ಲಿ 00-40 (ಹೆಕ್ಟರ್-ಹೇರ್ಸ್)<br><br>ಮುಂದುವರೆದು ಶ್ರೀ ಫ್ರಾನ್ಸಿಸ್ ಕರ್ನಾಟಕ ವೈರ್ ಅಂಡ್ ಮೆಟಲ್ ಕಾರ್ಪೋರೇಷನ್, ಬೆಂಗಳೂರು ರವರಿಗೆ ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 190 ಎಲ್‌ಜಿಬಿ 1973, ದಿನಾಂಕ:15.03.1973ರ ಅನ್ವಯ 5-00 ಎಕರೆ ಜಮೀನನ್ನು ವ್ಯವಸಾಯೇತರ ಉದ್ದೇಶಕ್ಕಾಗಿ ಮಂಜೂರು ಮಾಡಿದ್ದು, ಮ್ಯುಟೇಷನ್ ಸಂಖ್ಯೆ: ಎಂ.ಆರ್.04/2000-01 ಅಂಗೀಕಾರವಾಗಿರುತ್ತದೆ. |
| ಆ) | ಕಂದಾಯ ಇಲಾಖೆಯ ಈ ಜಾಗವನ್ನು ಯಾವ ಮಾನದಂಡಗಳನ್ನು ಆಧರಿಸಿ ಖಾಸಗಿ ವ್ಯಕ್ತಿಗೆ ಹಂಚಿಕೆ ಮಾಡಲಾಗಿದೆ; ಹಂಚಿಕೆಯಾದ ಭೂಮಿಗಿಂತ ಹೆಚ್ಚು ಪಟ್ಟು ಒತ್ತುವರಿ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರ ಕೈಗೊಂಡ ಕ್ರಮಗಳೇನು; | ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 190 ಎಲ್‌ಜಿಬಿ 1973, ದಿನಾಂಕ: 15/03/1973ರನ್ವಯ ವಿಶೇಷ ಜಿಲ್ಲಾಧಿಕಾರಿಯವರ ಕಛೇರಿ ಆದೇಶ ಸಂಖ್ಯೆ: B.DIS.LND/SR/3220, ದಿನಾಂಕ: 05/06/1973ರಂತೆ ಸದರಿ ಜಮೀನು ಮಂಜೂರಾಗಿರುತ್ತದೆ. ಮಂಜೂರಾದ ಜಮೀನಿಗಿಂತ ಹೆಚ್ಚು ಪಟ್ಟು ಒತ್ತುವರಿ ಮಾಡಿರುವುದು ಕಂಡುಬಂದಿರುವುದಿಲ್ಲ. |
| ಇ) | ಸದರಿ ಸರ್ಕಾರಿ ಜಾಗದಲ್ಲಿ ಖಾಸಗಿ ವಾಣಿಜ್ಯ ವ್ಯವಹಾರಗಳನ್ನು ನಡೆಸಲು ಕಟ್ಟಡ ಕಾಮಗಾರಿ ಪ್ರಾರಂಭಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರ ಅನುಮತಿ ನೀಡಿದೆಯೇ? (ವಿವರ ನೀಡುವುದು) | ಸದರಿ ಒಟ್ಟು 21-17 ಎ/ಗು ಜಮೀನಿನ ಪೈಕಿ 0-30 ಗುಂಟೆ ಜಮೀನಿನಲ್ಲಿ ಪಂಚಾಯಿತಿಯಿಂದ ನೀಡಿರುವ ಆಶ್ರಯ ಮನೆಗಳಿರುತ್ತದೆ, 13-25 ಎ/ಗು ಜಮೀನು ಬಿ.ಡಿ.ಎ ಗೆ ಭೂ-ಸ್ವಾಧೀನವಾಗಿ, ಸದರಿ ಜಮೀನನ್ನು ಸರ್ಕಾರಿ ಆದೇಶ ಸಂಖ್ಯೆ ಆರ್.70.ಎಲ್.ಜಿ.ಬಿ.2017, ದಿನಾಂಕ:02-08-2017 ರಂತೆ ದಿನಾಂಕ:23-11-2018 ರಂದು ಬಿ.ಡಿ.ಎ ಗೆ ಹಸ್ತಾಂತರ ಮಾಡಲಾಗಿರುತ್ತದೆ. 5-00 ಎಕರೆ ಜಮೀನು ಶ್ರೀ ಫ್ರಾನ್ಸಿಸ್ ರವರಿಗೆ ಮಂಜೂರಾಗಿರುತ್ತದೆ ಹಾಗೂ ಉಳಿಕೆ ಜಮೀನಿನಲ್ಲಿ |

| | | |
|---|---|---|
| | | ಸಾರ್ವಜನಿಕ ರಸ್ತೆ ಆಗಿರುತ್ತದೆ. ಸದರಿ ಜಮೀನುಗಳ ಮಂಜೂರಾತಿ ನೈಜತೆ ಬಗ್ಗೆ 136(3) ರಡಿಯಲ್ಲಿ ವಿಚಾರಣೆಗಾಗಿ ಪ್ರಕರಣ ದಾಖಲು ಮಾಡಲು ಕೋರಿ 2015 ರಲ್ಲಿ ವಿಶೇಷ ಜಿಲ್ಲಾಧಿಕಾರಿಯವರಿಗೆ ಬೆಂಗಳೂರು ಉತ್ತರ ತಾಲ್ಲೂಕಿನ ತಹಶೀಲ್ದಾರ್‌ರವರು ವರದಿ ಸಲ್ಲಿಸಿರುತ್ತಾರೆ. |

ಸಂಖ್ಯೆ: ಆರ್‌ಡಿ 04 ಎಲ್‌ಜಿಕ್ಯೂ 2020

(ಆರ್.ಅಶೋಕ)
ಕಂದಾಯ ಸಚಿವರು